RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಜೂನ್ ೨೦, ೨೦೧೩ (ಜ್ಯೇಷ್ಠ ೩೦, ಶಕ ವರ್ಷ ೧೯೩೫)<br>**Bangalore, Thursday, June 20, 2013 (Jyeishta 30, Shaka Varsha 1935)** | ಸಂಚಿಕೆ ೨೫<br>**Issue 25** |
|---|---|---|


## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ನಮೂನೆ–1**

(ನಿಯಮ–9)

**ನೋಂದಣಿ ಮತ್ತು ಮುದ್ರಾಂಕ ಇಲಾಖೆ, ಬೆಂಗಳೂರು**

**ಅಧಿಸೂಚನೆ**

**ಶ್ರೀ ರಾಗೀಂದ್ರಪ್ಪ ತಾಯಿ ದುರುಗವ್ವ** ಇವರು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ದೇವನಹಳ್ಳಿ ಉಪನೋಂದಣಿ ಕಛೇರಿಯಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದು, ಇವರ ಹೆಸರು ಬದಲಾವಣೆ ಮಾಡಲು ಕೋರಿರುತ್ತಾರೆ. ಅದರಂತೆ ಸದರಿ ನೌಕರರ ಹೆಸರನ್ನು **ರಾಘವೇಂದ್ರ ತಂದೆ ನಾಗಪ್ಪ** ಎಂದು ಬದಲಾವಣೆಗೆ ಅನುಮತಿ ನೀಡಲಾಗಿದೆ.

**P.D. C/N 57**
**SC - 5**

**Inspector General of Registration**
**And Commissioner of Stamps, Bangalore**

### IN THE COURT OF THE IV ADDITIONAL CITY CIVIL JUDGE
### CCH-21, MAYOHALL,BANGALORE

**P & SC No. 25020/2013**

(In the matter of the estate of Syed Aslam Hashmi-since deceased)

Petitioner 1) Mrs. Yasmin Aslam Hashmi, Aged about 49 years, Wife of late Syed Aslam Hashmi, 2) Mrs. Saeeda Hashmi, Aged about 78 years, 3) Mr. Syed Akhtar Hashmi, Aged about 53 years, 4) Mr. Syed Aarif Hashmi, Aged about 48 years, 5) Mr. Syed Azeem Hashmi, Aged about 45 years, 6) Mr. Syed Aijas Hashmi, Aged about 40 years, Petitioner No. 2 being the Widow and 3 to 6 being Sons of late Syed Ismail Hashmi, Petitioners 2 to 6 represented by their duly constituted agent and Power of Attorney Holder Mrs. Yasmin Aslam Hashmi, i.e. Petitioner No. 1, Petitioner No. 1 to 6 residing at No. 48/2 (10), Wellington Street, Richmond Town, Bangalore-560 025.

**V/S**

**Respondents : NIL**

**PUBLIC COURT NOTICE**

Notice is hereby given that a petition has been made to this court, Under Section 371 and 372 of the Indian Succession Act, for grant of “Succession Certificate” to the petitioners, in respect of the schedule properties, standing in the name of Syed Aslam Hashmi, who died intestate on 12-12-2012.

Be it known that, no caveat has been entered and that the said petition is posted for hearing on 28-6-2013 at 11.00 AM, and any person claiming to have any interest in the estate of the deceased may come and see the proceedings before the grant of, Succession Certificate.

**SCHEDULE**

| | | |
|---|---|---|
| I Terminal Benefits from A.R. Albisher & Z. Alkazemi | | |
| Authorized General Distributor of Mercedes-Benz in Kuwait | | |
| Approximately | | Rs. 20,00,000/- |
| II Shares | | |
| 1. Reliance Industries Limited | | |
| Equity shares each of Rs. 10/- | | |
| No. of shares 18 only | | |
| No. 001603528107-001603528124 | 18 X 10 | Rs. 180/- |
| 2. OK PLAY INDIA LIMITED | | |
| Equity share each of Rs. 10/- No. of shares 100 only | | |
| No. 5836801 to 5836900 | 10 X 100 | Rs. 1000/- |
| 3. OK PLAY INDIA LIMITED | | |
| Equity share each of Rs. 10/- No. of shares 100 only | | |
| No. 5836601 to 5836700 | 10 X 100 | Rs. 1000/- |
| 4. OK PLAY INDIA LIMITED | | |
| Equity share each of Rs. 10/- No. of shares 100 only | | |
| No. 5836701 to 5836800 | 10 X 100 | Rs. 1000/- |
| 5. WESTERN PAQUES (INDIA) LIMITED | | |
| Equity share each of Rs. 10/- No. of shares 100 only | | |
| No. 07287030-07287129 | 10 X 100 | Rs. 1000/- |
| III. HDFC Bank Depositry Service | | |
| DP ID : IN301151 Portfolio value | | Rs. 26350-00 |
| IV. Union Bank Account-No. | | |
| (S.B. Account No. 410202010014369 | | Rs. 60,805.33 |
| Avail Balance, as of 4-8-2012 | | |
| V. IL & FS Securities Services Limited | | |
| Approximate Market Value | | Rs. 10,00,000-00 |
| (I.D. No. 10369566) | | |
| VI. Mutual Fund Consolidated | | Rs. 80,000-00 |
| Account Statement | | |
| VII. India bulls-Securities Ltd. | | Rs. 10,00,000-00 |
| (I.D. NO. 10256177) | | |
| VIII HDFC Bank-Salco Centre-Richmond Road Branch, | | |
| S.B. Account No. 005231060000087 | | |
| Fixed Deposit | | |
| (i) Account No. 05237480000110 | | Rs. 2,20,007.46 |
| (ii) Account No. 05237480000127 | | Rs. 2,20,007.46 |
| IX HDFC Bank-M.G. Road Branch- | | |
| Savings Account No. 00761190000755 | | Rs. 57,398.88 |
| **Total** | | **Rs. 46,68,748-00** |

(Rupees Forty six lakhs sixty eight thousand and seven hundred and forty eight only)

Given under my hand and seal of this court on this the 28th day of May 2013.

By Order of the Court
**ASSISTANT REGISTRAR,**
City Civil Court, Mayohall Unit, Bangalore.

**P.D. 42**

## FORM-IV

(See Rule 12)

## NOTICE

It is hereby notified that the undersigned has changed her name from **Smt. M. SAVITHRIBAI** to **Smt. SUMATI.S.BAGALWADI.**

**M. SAVITHRIBAI**

**P.D. C/N 58**
**SC - 20**

## FORM-I

(See Rule 9)

**BLOCK EDUCATION DEPARTMENT, INDI**

**NOTIFICATION**

**Sri LAXMAN LIMBU LAMANI** working as a Assistant Teacher in the Government Higher Primary School at Tadavalaga L.T. Department of Office of the Block Education Office at Indi permitted to change his name as **LAXMAN LIMBU JADHAV.**

**P.D. C/N 59** **Block Development Officer,**
**SC - 5** **Indi Zone, Indi**

## ನಮೂನೆ–1

(ನಿಯಮ–9)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಆಕುಕ 299 ಹೆಚ್‌ಎಸ್‌ಹೆಚ್ 2013, ಬೆಂಗಳೂರು, ದಿನಾಂಕ: 24–05–2013**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕುಷ್ಠರೋಗ ಪುನರ್ವಸತಿ ಹಾಗೂ ಪದೋನ್ನತಿ ಘಟಕ, ಗುಲ್ಬರ್ಗಾ ಜಿಲ್ಲೆ ಇಲ್ಲಿ ವೈದ್ಯಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಡಾ॥ ವಿಜಯಲಕ್ಷ್ಮೀ ಜಿ ವಡೆಯರಾಜ್ ಇವರು ತಮ್ಮ ಹೆಸರನ್ನು ಡಾ॥ ವಿಜಯಲಕ್ಷ್ಮೀ ಜಿ.ವಿ. ಎಂದು ಬದಲಾಯಿಸಿಕೊಳ್ಳಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**P.D. C/N 60**
**SC - 25**

**KARNATAKA PUBLIC SERVICE COMMISSION , 'UDYOGA SOUDHA' BANGALORE - 1**

**NOTIFICATION**

**No. PSC 07 RT(4)B/2012, Dated : 06/16-05-13**

In pursuance of this Office Notification No. PSC 1 RTB-1/2012dated:22/11/2012, the Provisional Select List of candidates for 01 (Backlog) post of ASSISTANT DIRECTOR in the Department of KANNADA AND CULTURE prepared on the basis of Rule 6 of Karnataka State Civil Services (Unfilled Vacancies Reserved for Scheduled Castes and Scheduled Tribes) (Special Recruitment) Rules,2001,was published vide Notification of even number dated 28/03/2013 inviting objections,if any,from candidates within 15 days of its publication.The objections received within the stipulated time have been examined and the final selection list is hereby published for information of the candidates

APPOINTING AUTHORITY : **COMMISSIONER**

NAME OF THE DEPARTMENT : **KANNADA AND CULTURE**

| SL.NO. | NAME OF THE CANDIDATE | APPNO. | D_O_B | RESVN. | QUALIFICATION | MARKS |
|---|---|---|---|---|---|---|
| | | **MAIN LIST** | | | | |
| 1 | SIDRAM<br>S/O LAXMAN HARIJAN<br>AT/POST- SHIVOOR, TQ- AFZALPUR<br>DIST- GULBARGA-585217 | 1031087 | 01/06/73 | SC | BA | 80.39 |
| | | **ADDITIONAL LIST** | | | | |
| 1 | MOTILAL<br>S/O HANAMAPPA NAYKA<br>BAYYAPUR TANDA POST BAYYAPURA<br>TALUK LINGASUGUR, RAICHUR DISTRICT-584125 | 1031893 | 01/01/82 | SC | BA | 80.00 |

**K.R.SUNDAR**
Secretary
Karnataka Public Service Commission.

**P.R. 69**

## KARNATAKA PUBLIC SERVICE COMMISSION , 'UDYOGA SOUDHA' BANGALORE - 1

**NOTIFICATION**

**No. PSC 06 RT(4)B/2012, Dated : 14/16-05-13**

In pursuance of this Office Notification No. PSC 1 RTB-1/2012 dated:22/11/2012,the Provisional Select List of candidates for 01 (Backlog) post of LECTURER IN RUBBER TECHNOLOGY in the Department of TECHNICAL EDUCATION prepared on the basis of Rule 6 of Karnataka State Civil Services(Unfilled Vacancies Reserved for Scheduled Castes and Scheduled Tribes) (Special Recruitment) Rules,2001,was published vide Notification of even number dated 28/03/2013 inviting objections,if any,from candidates within 15 days of its publication. The objections received within the stipulated time have been examined and the final selection list is hereby published for information of the candidates

APPOINTING AUTHORITY : **DIRECTOR**

NAME OF THE DEPARTMENT : **TECHNICAL EDUCATION**

| SL.NO. | NAME OF THE CANDIDATE | APPNO. | D_O_B | RESVN. | QUALIFICATION | MARKS |
|---|---|---|---|---|---|---|
| | | **MAIN LIST** | | | | |
| 1 | SANTHOSH KUMAR P<br>H.NO-SUP-6<br>FRONT OF POST OFFICE<br>HUTTI GOLD MINES<br>TQ-LINGASUGUR DIS-RAICHUR-584115 | 1012898 | 05/05/87 | SC | B.E<br>[Polymer Technology]<br>Diploma<br>[Rubber Technology] | 64.95 |
| | | **ADDITIONAL LIST** | | | | |
| 1 | AJITH<br>S/O MAHALINGA, A P NILAYA<br>NEAR CHAMUNDESHWARI TEMPLE<br>HEROOR VILLAGE POST<br>BRAHMAVAR UDUPI DISTRICT-576213 | 1016072 | 25/04/87 | SC | B.E<br>[Polymer Technology]<br>Diploma<br>[Rubber Technology] | 63.83 |

**K.R.SUNDAR**
Secretary
Karnataka Public Service Commission.

**P.R. 70**

## KARNATAKA PUBLIC SERVICE COMMISSION , 'UDYOGA SOUDHA' BANGALORE - 1

**NOTIFICATION**

**No. PSC 03 RT(4)B/2012, Dated : 14/16-05-13**

In pursuance of this Office Notification No. PSC 1 RTB-1/2012 dated: 22/11/2012,the Provisional Select List of candidates for 02(Backlog) posts of JUNIOR HYDROGRAPHIC SURVEYOR in the Department of PORTS AND INLAND WATER TRANSPORT prepared on the basis of Rule 6 of Karnataka State Civil Services (Unfilled Vacancies Reserved for Scheduled Castes and Scheduled Tribes) (Special Recruitment)Rules,2001,was published vide Notification of even number dated 28/03/2013 inviting objections, if any,from candidates within 15 days of its publication.No objections was received within the stipulated time and the final selection list is hereby published for information of the candidates

APPOINTING AUTHORITY : **GOVERNMENT**

NAME OF THE DEPARTMENT : **PORTS AND INLAND WATER TRANSPORT**

| SL.NO. | NAME OF THE CANDIDATE | APPNO. | D_O_B | RESVN. | QUALIFICATION | MARKS |
|---|---|---|---|---|---|---|
| | | **MAIN LIST** | | | | |
| 1 | UMESH Y K<br>S/O YALLAPPA<br>AT/POST- YENNEKOPPA<br>TALUK-SORAB, DT-SHIMOGA-577413 | 1019667 | 01/06/76 | SC | B.Sc | 62.10 |
| | | **ADDITIONAL LIST** | | | | |
| 1 | MAHANTESH CHALAVADI<br>POST- NAGAVI<br>TALUK- GADAG<br>DIST- GADAG-582103 | 1002554 | 21/09/85 | SC | B.Sc | 57.17 |

**K.R.SUNDAR**
Secretary
Karnataka Public Service Commission

**P.R. 71**

## ಕರ್ನಾಟಕ ಲೋಕ ಸೇವಾ ಆಯೋಗ, "ಉದ್ಯೋಗ ಸೌಧ" ಬೆಂಗಳೂರು-560001

### ಅಧಿಸೂಚನೆ

**ಸಂಖ್ಯೆ: ಪಿಎಸ್‌ಸಿ 02 ಆರ್‌ಟಿಬಿ 12, ದಿನಾಂಕ: 04-06-2013**

ಆಯೋಗದ ಅಧಿಸೂಚನೆ ಸಂಖ್ಯೆ ಪಿಎಸ್‌ಸಿ 1 ಆರ್‌ಟಿಬಿ-1/2012 ದಿನಾಂಕ 22-11-2012 ರಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿನ ಸಹಾಯಕ ನಿರ್ದೇಶಕರು 18 ಹುದ್ದೆಗಳನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳಯ 2006 ರನ್ವಯ ನೇಮಕಾತಿ ಮಾಡಲು ಅಧಿಸೂಚಿಸಿ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ 26-12-2012 ರಂದು ಕೊನೆಯ ದಿನಾಂಕವೆಂದು ನಿಗದಿಪಡಿಸಲಾಗಿತ್ತು.

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ದಿನಾಂಕ 26-12-2012ರ ಪತ್ರದಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅವಕಾಶವಿಲ್ಲವಾದ್ದರಿಂದ ಈ ಪ್ರಕ್ರಿಯೆಯ ಸಂಬಂಧ ದಿನಾಂಕ 22-11-2012ರಂದು ಹೊರಡಿಸಿರುವ ಪ್ರಕಟಣೆಯನ್ನು ಹಿಂಪಡೆಯುವಂತೆ ವಿನಂತಿಸಿರುತ್ತಾರೆ. ಆದಕಾರಣ, ದಿನಾಂಕ 22-11-2012ರ ಅಧಿಸೂಚನೆಯಲ್ಲಿ ಅನುಕ್ರಮ ಸಂಖ್ಯೆ 01-18 ರಲ್ಲಿ ಪ್ರಕಟಿಸಲಾಗಿದ್ದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿನ 18 ಸಹಾಯಕ ನಿರ್ದೇಶಕರ ಹುದ್ದೆಗಳ ನೇಮಕಾತಿ ಪ್ರಕ್ರಿಯೆಯನ್ನು ಈ ಮೂಲಕ ರದ್ದುಪಡಿಸಿದೆ.

**ಡಿ.ಜಯರಾಮಯ್ಯ**
ಕಾರ್ಯದರ್ಶಿ (ಪ್ರಭಾರ),
ಕರ್ನಾಟಕ ಲೋಕಸೇವಾ ಆಯೋಗ.

PR 67

## ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-560 001.

**ಸಂಖ್ಯೆ: ಪಿಎಸ್‌ಸಿ 1 ಆರ್‌ಟಿಬಿ-1/2013, ದಿನಾಂಕ: 01-06-2013**

### ಅಧಿಸೂಚನೆ

1. ಆಯೋಗವು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ರಡಿಯಲ್ಲಿ ಕೆಳಕಂಡ ಗ್ರೂಪ್-'ಎ', 'ಬಿ' ಮತ್ತು 'ಸಿ' ತಾಂತ್ರಿಕ ಹುದ್ದೆಗಳನ್ನು ಭರ್ತಿ ಮಾಡಲು ON-LINE ಮೂಲಕ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ:-

*** ಆಯುಷ್ ಇಲಾಖೆಯಲ್ಲಿನ ಅಯುಷ್ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಆಯುರ್ವೇದ, ಪ್ರಕೃತಿ ಚಿಕಿತ್ಸೆ ಮತ್ತು ಯೋಗ, ಯುನಾನಿ ಮತ್ತು ಹೋಮಿಯೋಪತಿ ವಿಭಾಗಗಳಲ್ಲಿನ ವಿವಿಧ ವಿಷಯಗಳ ಪ್ರಾಧ್ಯಾಪಕರು / ಸಹಾಯಕ ಪ್ರಾಧ್ಯಾಪಕರು / ಉಪನ್ಯಾಸಕರುಗಳ ಹುದ್ದೆಗಳು**

| ಕ್ರಮ ಸಂಖ್ಯೆ | ವಿಷಯದ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| | **ಗ್ರೂಪ್-'ಎ' ಹುದ್ದೆಗಳು** | |
| | **ಪ್ರಾಧ್ಯಾಪಕರು (ಆಯುರ್ವೇದ) — 26 ಹುದ್ದೆಗಳು** | |
| 1 | ಸಂಹಿತ ಸಿದ್ದಾಂತ | 04 |
| 2 | ಕ್ರಿಯಾ ಶಾರೀರ | 03 |
| 3 | ರಸಶಾಸ್ತ್ರ ಮತ್ತು ಭೈಷಜ್ಯಕಲ್ಪನಾ | 01 |
| 4 | ರೋಗನಿಧಾನ | 03 |
| 5 | ಸ್ವಸ್ಥವೃತ್ತ | 02 |
| 6 | ಅಗಧತಂತ್ರ ಮತ್ತು ವಿಧಿ ಆಯುರ್ವೇದ | 03 |
| 7 | ಕಾಯ ಚಿಕಿತ್ಸಾ | 01 |
| 8 | ಕೌಮಾರಭೃತ್ಯ | 03 |
| 9 | ಪಂಚಕರ್ಮ | 04 |
| 10 | ರಚನಾ ಶಾರೀರ | 02 |
| | **ಪ್ರಾಧ್ಯಾಪಕರು ಪ್ರಕೃತಿ ಚಿಕಿತ್ಸೆ ಮತ್ತು ಯೋಗ - 02 ಹುದ್ದೆಗಳು** | |
| 11 | ಪ್ರಕೃತಿ ಚಿಕಿತ್ಸೆ | 01 |
| 12 | ಯೋಗ | 01 |

| ಕ್ರಮ ಸಂಖ್ಯೆ | ವಿಷಯದ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| | **ಸಹಾಯಕ ಪ್ರಾಧ್ಯಾಪಕರು (ಆಯುರ್ವೇದ)– 18 ಹುದ್ದೆಗಳು** | |
| 13 | ಸಿದ್ಧಾಂತ ಸಂಹಿತ | 02 |
| 14 | ರಚನಾ ಶಾರೀರ | 02 |
| 15 | ಕ್ರಿಯಾ ಶಾರೀರ | 02 |
| 16 | ರಸಶಾಸ್ತ್ರ ಮತ್ತು ಭೈಷಜ್ಯಕಲ್ಪನಾ | 03 |
| 17 | ರೋಗನಿಧಾನ | 03 |
| 18 | ಸ್ವಸ್ಥವೃತ್ತ | 01 |
| 19 | ಪ್ರಸೂತಿ ಮತ್ತು ಸ್ತ್ರೀರೋಗ | 03 |
| 20 | ಕಾಯ ಚಿಕಿತ್ಸಾ | 01 |
| 21 | ಶಲ್ಯತಂತ್ರ | 01 |
| | **ಸಹಾಯಕ ಪ್ರಾಧ್ಯಾಪಕರು (ಪ್ರಕೃತಿ ಚಿಕಿತ್ಸೆ ಮತ್ತು ಯೋಗ) — 02 ಹುದ್ದೆಗಳು** | |
| 22 | ಪ್ರಕೃತಿ ಚಿಕಿತ್ಸೆ | 01 |
| 23 | ಯೋಗ | 01 |
| | **ಸಹಾಯಕ ಪ್ರಾಧ್ಯಾಪಕರು (ಯುನಾನಿ) — 05 ಹುದ್ದೆಗಳು** | |
| 24 | Munafe-ul-Aza (Physiology) | 01 |
| 25 | Ilmul Advia-wa-Saidla (Pharmacology) | 01 |
| 26 | Moalejat (Medicine) | 01 |
| 27 | Niswan-wa-Atfal(Gynaecology & Pediatrics) | 01 |
| 28 | Ilmul Qabalat (Obstetrics) | 01 |
| | **ಸಹಾಯಕ ಪ್ರಾಧ್ಯಾಪಕರು (ಹೋಮಿಯೋಪತಿ) — 05 ಹುದ್ದೆಗಳು** | |
| 29 | Physiology including Bio-Chemistry | 01 |
| 30 | Community Medicine | 01 |
| 31 | Practice of Medicine | 01 |
| 32 | Surgery | 01 |
| 33 | Organon of Medicine | 01 |
| | **ಗ್ರೂಪ್–' ಬಿ ' ಹುದ್ದೆಗಳು**<br>**ಉಪನ್ಯಾಸಕರು (ಆಯುರ್ವೇದ) — 23 ಹುದ್ದೆಗಳು** | |
| 34 | ಆಯುರ್ವೇದ ಸಿದ್ಧಾಂತ / ಸಿದ್ಧಾಂತ | 02 |
| 35 | ಸಂಸ್ಕೃತ | 03 |
| 36 | ಕ್ರಿಯಾ ಶಾರೀರ | 03 |
| 37 | ರಸಶಾಸ್ತ್ರ ಮತ್ತು ಭೈಷಜ್ಯಕಲ್ಪನಾ | 02 |
| 38 | ರೋಗನಿಧಾನ | 04 |
| 39 | ಸ್ವಸ್ಥವೃತ | 01 |
| 40 | ಅಗಧತಂತ್ರ ವಿಧಿ ಆಯುರ್ವೇದ | 02 |
| 41 | ಪ್ರಸೂತಿತಂತ್ರ ಮತ್ತು ಸ್ತ್ರೀರೋಗ | 02 |
| 42 | ಕೌಮಾರಭೃತ್ಯ | 02 |
| 43 | ಕಾಯ ಚಿಕಿತ್ಸಾ | 01 |
| 44 | ರಚನಾ ಶರೀರ | 01 |

| ಕ್ರಮ ಸಂಖ್ಯೆ | ವಿಷಯದ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| ಉಪನ್ಯಾಸಕರು (ಪ್ರಕೃತಿ ಚಿಕಿತ್ಸೆ ಮತ್ತು ಯೋಗ) — 06 ಹುದ್ದೆಗಳು | | |
| 45 | ಪ್ರಕೃತಿ ಚಿಕಿತ್ಸೆ | 02 |
| 46 | ಯೋಗ | 02 |
| 47 | ಅನಾಟಮಿ | 01 |
| 48 | ಫಿಜಿಯಾಲಜಿ | 01 |
| ಉಪನ್ಯಾಸಕರು (ಯುನಾನಿ) — 08 ಹುದ್ದೆಗಳು | | |
| 49 | Kullyat-e-Tib(Basic Principles) | 01 |
| 50 | Tashreeh-ul-Badan(Anatomy) | 01 |
| 51 | Munafe-ul-Aza(Physiology) | 01 |
| 52 | Ilmul-Advia-wa-Saidla (Pharmacology) | 01 |
| 53 | Ilmul Amraz (Pathology) | 01 |
| 54 | Tahaffuzi-wa-samaji-Tib (Preventive and Social Medicine) | 01 |
| 55 | Moalejat (Medicine) | 01 |
| 56 | Ilmul Qabalat(Obstetrics) | 01 |
| ಉಪನ್ಯಾಸಕರು (ಹೋಮಿಯೋಪತಿ) — 05 ಹುದ್ದೆಗಳು | | |
| 57 | Anatomy | 01 |
| 58 | Pathology & Micro-biology | 01 |
| 59 | Forensic Science & Toxicology | 01 |
| 60 | Surgery | 01 |
| 61 | Obstetrics & Gynaecology | 01 |

| ಕ್ರಮ ಸಂಖ್ಯೆ | ಇಲಾಖೆಯ ಹೆಸರು ಮತ್ತು ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 62 | ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಗಳಲ್ಲಿ ಗಣಿತಶಾಸ್ತ್ರ ಸಹಾಯಕ ಪ್ರಾಧ್ಯಾಪಕರು | 01(ಬ್ಯಾ.ಲಾ) |
| 63 | ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಗಳಲ್ಲಿ ಸಹಾಯಕ ನಿರ್ದೇಶಕರು(ದೈಹಿಕ ಶಿಕ್ಷಣ ಮತ್ತು ಕ್ರೀಡೆ) | 03(ಬ್ಯಾ.ಲಾ) |
| ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿನ ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿ ವಿವಿಧ ವಿಷಯಗಳ ಉಪನ್ಯಾಸಕರುಗಳ ಬ್ಯಾಕ್‌ಲಾಗ್ ಹುದ್ದೆಗಳು | | |
| 64 | ಮೆಷಿನ್ ಟೂಲ್ ಟೆಕ್ನಾಲಜಿ | 03(ಬ್ಯಾ.ಲಾ) |
| 65 | ಕಾಸ್ಟ್ಯೂಮ್ ಡಿಸೈನ್ ಅಂಡ್ ಡ್ರೆಸ್ ಮೇಕಿಂಗ್ | 01(ಬ್ಯಾ.ಲಾ) |
| 66 | ಸಿವಿಲ್ ಇಂಜಿನಿಯರಿಂಗ್ | 02(ಬ್ಯಾ.ಲಾ) |
| 67 | ಮೆಟಲರ್ಜಿ ಇಂಜಿನಿಯರಿಂಗ್ | 01(ಬ್ಯಾ.ಲಾ) |
| 68 | ವೆಲ್ಡಿಂಗ್ ಅಂಡ್ ಶೀಡ್ ಮೆಟಲ್ | 01(ಬ್ಯಾ.ಲಾ) |
| 69 | ಸಿರಾಮಿಕ್ಸ್ | 01(ಬ್ಯಾ.ಲಾ) |
| 70 | ವಿಜ್ಞಾನ | 01(ಬ್ಯಾ.ಲಾ) |
| 71 | ಔಷಧ ನಿಯಂತ್ರಣ ಇಲಾಖೆಯಲ್ಲಿ ಜೂನಿಯರ್ ಸೈಂಟಿಫಿಕ್ ಆಫೀಸರ್ | 08 (ಬ್ಯಾ.ಲಾ) |

| | | |
|---|---|---|
| 72 | * ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯದಲ್ಲಿನ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಲ್ಲಿ ಪ್ರಾಂಶುಪಾಲರು | 32 |
| 73 | * ಭಾಷಾಂತರ ನಿರ್ದೇಶನಾಲಯದಲ್ಲಿ ಭಾಷಾಂತರಕಾರರು(ಕನ್ನಡ) | 15+03(ಬ್ಯಾ.ಲಾ) |
| **ಗ್ರೂಪ್–'ಸಿ' ಹುದ್ದೆಗಳು** | | |
| 74 | * ಅಯುಷ್ ಇಲಾಖೆಯಲ್ಲಿ ಶುಶ್ರೂಷಕಿಯರು | 50 |

* ಇಲಾಖೆಗಳ ಪ್ರಸ್ತಾವನೆಗಳಂತೆ ಈ ಹುದ್ದೆಗಳು ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿರುವುದಿಲ್ಲ.

**ಟಿಪ್ಪಣಿ :** ಅನುಸೂಚಿಯಲ್ಲಿ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ. ಅಭ್ಯರ್ಥಿಗಳು ಒಂದು ಹುದ್ದೆಗೆ ಒಂದೇ ಅರ್ಜಿ ಸಲ್ಲಿಸತಕ್ಕದ್ದು, ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ಅಂತಹ ಅರ್ಜಿಗಳನ್ನು ಯಾವುದೇ ಮುನ್ಸೂಚನೆಯಿಲ್ಲದೇ ತಿರಸ್ಕರಿಸಲಾಗುವುದು.

ಅರ್ಜಿಗಳನ್ನು ಆನ್–ಲೈನ್ (ON-LINE) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು, ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.

1) ಅಭ್ಯರ್ಥಿಗಳು ಅರ್ಜಿಯನ್ನು On-Line ನಲ್ಲಿ ನೀಡಿರುವ ಸೂಚನೆಗಳನ್ವಯ ಭರ್ತಿ ಮಾಡತಕ್ಕದ್ದು.
2) ಅಭ್ಯರ್ಥಿಗಳು ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಆಯೋಗವು ಕಾನೂನಿನನ್ವಯ ಸೂಕ್ತ ಕ್ರಮ ಕೈಗೊಳ್ಳುವುದು.

ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು:–

| | |
|---|---|
| GM-General Merit | ST-Scheduled Tribe |
| C-I-Category I | Ex-MP-Ex-Military Person |
| 2A-Category 2A | Rural-Rural Reservation |
| 2B-Category 2B | KMS-Kannada Medium Student |
| 3A-Category 3A | PDP-Project Displaced Person |
| 3B-Category 3B | PH-Physically Handicapped |
| SC-Scheduled Caste | |

**ವಿಶೇಷ ಸೂಚನೆ :–** ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಛಿಸಿದ್ದಲ್ಲಿ, ಅಂತಹ ಅಭ್ಯರ್ಥಿಗಳು ಪ್ರತಿ ಹುದ್ದೆಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಿ ಶುಲ್ಕವನ್ನು ಪಾವತಿಸತಕ್ಕದ್ದು.

**2. ಶುಲ್ಕ:–**

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | **₹:** 300/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಮತ್ತು ಅಂಗವಿಕಲ ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ | **₹:** 25/– |

**2.1** ಕರ್ನಾಟಕ ರಾಜ್ಯದಲ್ಲಿನ ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಗಳಲ್ಲಿ ಚಲನ್ ನೀಡಿ ಹಣ ಪಾವತಿಸತಕ್ಕದ್ದು. ON-LINE ನಲ್ಲಿ ಅರ್ಜಿ ಸಲ್ಲಿಸಿ ಬ್ಯಾಂಕಿನ ಚಲನ್‌ಗಳನ್ನು ಡೌನ್‌ಲೋಡ್ ಮಾಡಿಕೊಂಡು ನಿಗದಿಪಡಿಸಿದ ಮೊಬಲಗನ್ನು ಸಂಬಂಧಿಸಿದ ಬ್ಯಾಂಕ್‌ಗೆ ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಪಾವತಿಸತಕ್ಕದ್ದು.

**2.2** ನಿಗದಿತ ಶುಲ್ಕವನ್ನು ಈ ಕೆಳಕಂಡ ವಿಧಾನಗಳಲ್ಲಿಯೂ ಪಾವತಿ ಮಾಡಬಹುದು

1) NET BANKING
2) Credit / Debit CardPayment
3) NEFT

ಇದನ್ನು ಹೊರತುಪಡಿಸಿ ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**3.** ಅಭ್ಯರ್ಥಿಗಳು ONLINE ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು.

**ಹಂತ 1:–** ಅಭ್ಯರ್ಥಿಗಳು ಆಯೋಗದ ಅಧಿಕೃತ ವೈಬ್‌ಸೈಟ್ **"http://kpsc.kar.nic.in"**ನ್ನು ತೆರೆದ ಕೂಡಲೇ ಕಂಪ್ಯೂಟರ್ ಪರದೆಯ ಮೇಲೆ 'Application For Technical Posts' ಎಂದು ಮೂಡುತ್ತದೆ ಮತ್ತು ಅಧಿಸೂಚನೆ/ಪರೀಕ್ಷಾ ಶುಲ್ಕ / ಬ್ಯಾಂಕಿನ ವಿವರಗಳು ಲಭ್ಯವಾಗಲಿದ್ದು, ಅಭ್ಯರ್ಥಿಗಳು ಅಧಿಸೂಚನೆಯಲ್ಲಿನ ವಿವರಗಳನ್ನು ಮತ್ತು ಅರ್ಜಿ ಸಲ್ಲಿಸುವ ಸೂಚನೆಗಳನ್ನು ತಪ್ಪದೇ ಓದಿಕೊಂಡು ಅದರಂತೆ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು.

**ಹಂತ 2:–** ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಭ್ಯರ್ಥಿಯು ತನ್ನ ಇತ್ತೀಚಿಗಿನ ಭಾವಚಿತ್ರವನ್ನು ಒಂದು ಸ್ವಚ್ಛವಾದ ಬಿಳಿಯ ಹಾಳೆಯ ಮೇಲೆ ಲಗತ್ತಿಸಿ ಅದರ ಕೆಳಗೆ ಕಪ್ಪು ಶಾಯಿಯ ಸ್ಕೆಚ್/ಮಾರ್ಕರ್ ಪೆನ್ನಿನಿಂದ ಸಹಿಯನ್ನು ಮಾಡಿ (ಯಾವುದೇ ಕಾರಣಕ್ಕೂ ಭಾವ ಚಿತ್ರದ ಮೇಲೆ ಸಹಿ ಮಾಡಬಾರದು) ನಂತರ ಭಾವಚಿತ್ರ (Photo) ಮತ್ತು ಸಹಿಯನ್ನು ಒಳಗೊಂಡಂತೆ ಈ ಕೆಳಗಿನ ಅಳತೆ ಪ್ರಕಾರ ಸ್ಕ್ಯಾನ್ ಮಾಡಿ ಇಟ್ಟುಕೊಂಡಿರತಕ್ಕದ್ದು.

<table>
<tr><td>O ಫೈಲ್ ಅಳತೆ=100 ಕೆಬಿ</td><td rowspan="5">ಪಾಸ್ ಪೋರ್ಟ್ ಭಾವಚಿತ್ರದ ಅಳತೆಗಳು:<br>45 ಎಂ.ಎಂ (ಉದ್ದ) X 35 ಎಂ.ಎಂ (ಅಗಲ)<br>ಸಹಿ ಅಳತೆ:<br>20ಎಂ.ಎಂ (ಉದ್ದ) X 35 ಎಂ.ಎಂ (ಅಗಲ)</td></tr>
<tr><td>O ಡಿಪಿಐ ಹಿನ್ನೆಲೆ=100 ಡಿಪಿಐ</td></tr>
<tr><td>O ಇಮೇಜ್ ಅಳತೆ=100%</td></tr>
<tr><td>O ಕಲರ್</td></tr>
<tr><td>O ಜೆಪಿಇಜಿ (jpeg)</td></tr>
</table>

**ಹಂತ 3:–** ಸಂಬಂಧಪಟ್ಟ ಹುದ್ದೆಯ ಮೇಲೆ ಕ್ಲಿಕ್ ಮಾಡಿ ಅರ್ಜಿಯನ್ನು ಭರ್ತಿಮಾಡತಕ್ಕದ್ದು. ಅರ್ಜಿಯನ್ನು ಭರ್ತಿಮಾಡಿದ ನಂತರ ನಮೂದಿಸಿರುವ ವಿವರಗಳನ್ನು ಮತ್ತೊಮ್ಮೆ ಕೂಲಂಕಷವಾಗಿ ಪರಿಶೀಲಿಸಬೇಕು. ಅರ್ಜಿಯಲ್ಲಿ ನಮೂದಿಸಿರುವ ವಿವರಗಳಲ್ಲಿ ಏನಾದರೂ ತಪ್ಪುಗಳಾಗಿದ್ದಲ್ಲಿ ಅದನ್ನು ಸರಿಪಡಿಸಲು Edit ಮೇಲೆ ಕ್ಲಿಕ್ ಮಾಡಿ ನಂತರ ಅಗತ್ಯ ತಿದ್ದುಪಡಿಗಳನ್ನು ಮಾಡಬಹುದು.

**ಹಂತ 4:–** ಅರ್ಜಿಯಲ್ಲಿ ಭರ್ತಿ ಮಾಡಿರುವ ಎಲ್ಲಾ ವಿವರಗಳು ಸರಿಯಾಗಿರುತ್ತವೆಯೆಂದು ಮನದಟ್ಟು ಮಾಡಿಕೊಂಡು ನಂತರ ಸ್ಕ್ಯಾನ್ ಮಾಡಿಟ್ಟುಕೊಂಡಿರುವ ಭಾವಚಿತ್ರ (Photo) ಮತ್ತು ಸಹಿಯನ್ನು upload ಮಾಡತಕ್ಕದ್ದು. Photo & Signature upload ಮಾಡಿದ ನಂತರ ಅರ್ಜಿಯಲ್ಲಿನ ವಿವರಗಳು ಸರಿಯಾಗಿರುತ್ತವೆಯೆಂದು ಒಪ್ಪಿರುತ್ತೇನೆ (I agree) ಎಂಬ ಘೋಷಣೆಯ ಮೇಲೆ ಕ್ಲಿಕ್ ಮಾಡತಕ್ಕದ್ದು, ಅನಂತರವೇ Generate Challan ಮತ್ತು Application Preview ಮೂಡಲಿದ್ದು, ಎರಡನ್ನೂ Download ಮಾಡಿ ಕೊಳ್ಳತಕ್ಕದ್ದು. ಮತ್ತು ಅರ್ಜಿಯ ಪ್ರತಿಯನ್ನು ಮತ್ತು ಶುಲ್ಕ ಸಂದಾಯ ಮಾಡಿದ ಚಲನ್‌ಅನ್ನು ಕಡ್ಡಾಯವಾಗಿ ಅಭ್ಯರ್ಥಿಗಳು ತಮ್ಮೊಂದಿಗೆ ಇಟ್ಟುಕೊಳ್ಳತಕ್ಕದ್ದು. ಆಯೋಗವು ಅಪೇಕ್ಷಿಸಿದಾಗ ಈ ಚಲನ್ ಅನ್ನು ಹಾಜರುಪಡಿಸಬೇಕು.

**ಹಂತ 5:–** Download ಮಾಡಿಕೊಳ್ಳಲಾದ Challan ನಲ್ಲಿರುವ ಶುಲ್ಕವನ್ನು ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಗಳಲ್ಲಿ ಚಲನ್ ನೀಡಿ ಹಣ ಸಂದಾಯ ಮಾಡಬಹುದಾಗಿರುತ್ತದೆ. ಶುಲ್ಕವನ್ನು ಪಾವತಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ. ಸಿಂಡಿಕೇಟ್ ಬ್ಯಾಂಕ್ ಅನ್ನು ಹೊರತುಪಡಿಸಿ ಇತರೆ ಯಾವುದೇ ಬ್ಯಾಂಕಿನಲ್ಲಿ ಶುಲ್ಕ ಸಂದಾಯ ಮಾಡುವಂತಿಲ್ಲ. ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಸಂದಾಯ ಮಾಡದ ಅರ್ಜಿಗಳನ್ನು ತಿರಸ್ಕೃತಗೊಳಿಸಲಾಗುವುದು.

**3.1** ಅಭ್ಯರ್ಥಿಗಳು ತಮ್ಮ ಅರ್ಜಿಯ ಸ್ಥಿತಿಯನ್ನು ತಿಳಿಯಬೇಕಾದಲ್ಲಿ, ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ 15 ದಿನಗಳ ತರುವಾಯು, ಆಯೋಗದ ವೆಬ್‌ಸೈಟ್‌ನ Check Status ಲಿಂಕಿನಲ್ಲಿ ಮಾಹಿತಿಗಳನ್ನು ದಾಖಲಿಸಿ, ಅರ್ಜಿಯು ಸಿಂಧುವಾಗಿರುವ ಬಗ್ಗೆ ಮಾಹಿತಿಯನ್ನು ಪಡೆಯಬಹುದಾಗಿರುತ್ತದೆ. ತಮ್ಮ ಅರ್ಜಿಯ ಮಾಹಿತಿ ಆಯೋಗದ ವೆಬ್ ಸೈಟ್ ನಲ್ಲಿ ದೊರೆಯದಿದಲ್ಲಿ ನೀವು ಪಾವತಿಸಿರುವ ಶುಲ್ಕದ ವಿವರವುಳ್ಳ ಚಲನ್ ಪ್ರತಿಯೊಂದಿಗೆ ಆಯೋಗವನ್ನು ಸಂಪರ್ಕಿಸಬಹುದು.

**3.2** ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

* **ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ: 05-06-2013.**
* **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 04-07-2013.**
* **ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 05-07-2013.**

**ವಿಶೇಷ ಸೂಚನೆ:** On-line ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line) 9611776119 ಮತ್ತು 9611741448 ಅನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

**4. ಅರ್ಹತಾ ಷರತ್ತುಗಳು:–**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**5. ತಾಂತ್ರಿಕ ಹುದ್ದೆಗಳ ನೇಮಕಾತಿ ವಿಧಾನ (ಸಂದರ್ಶನದ ಮೂಲಕ ಆಯ್ಕೆ):–**

**5 (1) ಕಡ್ಡಾಯ ಕನ್ನಡ ಭಾಷಾ ಪರೀಕ್ಷೆ:–**

ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006 ರಲ್ಲಿ ನಿರ್ದಿಷ್ಟಪಡಿಸಲಾದಂತೆ, ಅಧಿಸೂಚಿಸಲಾಗಿರುವ ಯಾವುದೇ ತಾಂತ್ರಿಕ/ ತಾಂತ್ರಿಕೇತರ ಹುದ್ದೆಗಳ ಸಂದರ್ಶನಕ್ಕೆ ಅರ್ಹರಾಗಲು ಅಭ್ಯರ್ಥಿಗಳು ಆಯೋಗ ನಡೆಸುವ ಎಸ್.ಎಸ್.ಎಲ್.ಸಿ.ಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಾಗುವುದಿಲ್ಲ ಹಾಗೂ ಈ ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

ಆದರೆ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ವಿನಾಯಿತಿ ಬಗ್ಗೆ ಕೆಳಕಂಡ ಷರತ್ತುಗಳನ್ನು ಸೇರ್ಪಡಿಸಲಾಗಿರುತ್ತದೆ.

> “ ಎಸ್.ಎಸ್.ಎಲ್.ಸಿ. ಅಥವಾ ಇದಕ್ಕೆ ತತ್ಸಮಾನವೆಂದು ರಾಜ್ಯ ಸರ್ಕಾರದಿಂದ ಘೋಷಿಸಲ್ಪಟ್ಟ ಇತರೆ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ. ಪರೀಕ್ಷೆಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆಯಾಗಿ, ಅಥವಾ ದ್ವಿತೀಯ ಭಾಷೆಯಾಗಿ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿರುವ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಇದೇ ನಿಯಮಗಳಡಿಯಲ್ಲಿ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷೆ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಅಭ್ಯರ್ಥಿಗಳು, ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದರಿಂದ ವಿನಾಯಿತಿ ಹೊಂದಿರುತ್ತಾರೆ ”.

**ವಿಶೇಷ ಸೂಚನೆ :–** ಈ ಮೇಲಿನ ವಿನಾಯಿತಿ ಹೊಂದಿರದ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕನ್ನಡ ಭಾಷೆಯನ್ನು ತೃತೀಯ ಭಾಷೆಯನ್ನಾಗಿ ಅಭ್ಯಸಿಸಿದ್ದಲ್ಲಿ ಅಂತಹವರು ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯನ್ನು ತೆಗೆದುಕೊಳ್ಳಲೇಬೇಕಿರುತ್ತದೆ. ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಿಂದ ವಿನಾಯಿತಿ ಪಡೆಯಲು ಅರ್ಜಿಯ ನಿಗದಿತ ಸ್ಥಳದಲ್ಲಿ ವಿವರಗಳನ್ನು ನೀಡತಕ್ಕದ್ದು. ಸರಿಯಾದ ಮಾಹಿತಿ ಒದಗಿಸದಿದ್ದಲ್ಲಿ ಮೇಲಿನ ವಿನಾಯಿತಿಗಳನ್ನು ಪಡೆಯಲು ಅರ್ಹತೆ ನೀಡುವುದಿಲ್ಲ.

**ಸೂಚನೆ :–** ಕನ್ನಡ ಕಡ್ಡಾಯ ಭಾಷಾ ಪರೀಕ್ಷೆಯ ಪಠ್ಯಕ್ರಮವನ್ನು ಆಯೋಗದ ವೆಬ್ ಸೈಟ್ **“http://kpsc.kar. nic.in/SYLLABUS_”**ನಲ್ಲಿ ಬಿತ್ತರಿಸಲಾಗಿದೆ.

5(2) ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಅರ್ಹರಾದ ನಂತರ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ ಉಪನಿಯಮ 6ರನ್ವಯ ಅಭ್ಯರ್ಥಿಗಳನ್ನು ಅವರು ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡವಾರು ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ 1:3 ಅನುಪಾತದಲ್ಲಿ ಸಂದರ್ಶನಕ್ಕೆ ಆಹ್ವಾನಿಸಲಾಗುವುದು. ಅಭ್ಯರ್ಥಿಗಳು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

5(3) ಸಂದರ್ಶನ ನಡೆಸುವ ಉದ್ದೇಶ ಎಂದರೆ ಅಭ್ಯರ್ಥಿಗಳು ಆಯ್ಕೆ ಬಯಸಿದ ಹುದ್ದೆಗೆ ಅವರ ಅರ್ಹತೆ, ವ್ಯಕ್ತಿತ್ವ, ಸಂಬಂಧಿತ ವಿಷಯದಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯತೆ, ಸೂಕ್ಷ್ಮತೆ ಮತ್ತು ಕರ್ತೃತ್ವ ಶಕ್ತಿ, ಸಾಮಾನ್ಯ ಜ್ಞಾನ ಹಾಗೂ ವಿಷಯದಲ್ಲಿನ ಪರಿಜ್ಞಾನ ಹಾಗೂ ಇನ್ನಿತರ ವಿಶೇಷ ಗುಣಗಳನ್ನು ನಿರ್ಧರಿಸುವುದಾಗಿದ್ದು, ಅಭ್ಯರ್ಥಿಗಳು ಆಯಾ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಶೇಕಡವಾರು ಅಂಕಗಳ ಮತ್ತು ಆಯೋಗವು ನಡೆಸುವ ಸಂದರ್ಶನದಲ್ಲಿ ಗಳಿಸಿದ ಅಂಕಗಳ ಜೇಷ್ಠತೆಯ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಆಯ್ಕೆ ಮಾಡಲಾಗುವುದು.

**ಸಂದರ್ಶನಕ್ಕೆ ನಿಗದಿಪಡಿಸಲಾದ ಗರಿಷ್ಠ ಅಂಕಗಳು 15 (ಹದಿನೈದು)**

5.(4) ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಸಹಾಯಕ ನಿರ್ದೇಶಕರು (ದೈಹಿಕ ಶಿಕ್ಷಣ ಮತ್ತು ಕ್ರೀಡೆ) ಹುದ್ದೆಗಳಿಗೆ ನಿಯಮಾನುಸಾರ ಸಂದರ್ಶನಕ್ಕೆ ಅರ್ಹರಾಗುವ ಅಭ್ಯರ್ಥಿಗಳಿಗೆ ಮೊದಲು ದೈಹಿಕ ಅರ್ಹತೆ (PHYSICAL FITNESS) ಪರೀಕ್ಷೆಯನ್ನು ನಡೆಸಿ ಇದರಲ್ಲಿ ಅರ್ಹತೆ ಹೊಂದಿರುವ ಅಭ್ಯರ್ಥಿಗಳನ್ನು ಮಾತ್ರ ಸಂದರ್ಶನಕ್ಕೆ ಪರಿಗಣಿಸಲಾಗುವುದು.

**6. ಶೈಕ್ಷಣಿಕ ವಿದ್ಯಾರ್ಹತೆ ಮತ್ತು ವಯೋಮಿತಿ:–**

6(ಎ) **ಶೈಕ್ಷಣಿಕ ವಿದ್ಯಾರ್ಹತೆ:–** ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಆಯಾ ಹುದ್ದೆಗಳ ಮುಂದೆ ಸೂಚಿಸಿರುವ ಕನಿಷ್ಠ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು. ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೆ ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿದ್ದರೂ ಸಹ ಪರಿಗಣಿಸಲಾಗುವುದಿಲ್ಲ.

6(ಬಿ) ಯಾವುದೇ ಹುದ್ದೆಗೆ ಸೇವಾನುಭವವನ್ನು ನಿಗದಿಪಡಿಸಿದಾಗ ಅಭ್ಯರ್ಥಿಗಳು ವಿದ್ಯಾರ್ಹತೆ ಹೊಂದಿದ ನಂತರ ಸೇವಾನುಭವ ಹೊಂದಿರತಕ್ಕದ್ದು.

**ಪ್ರಾಧ್ಯಾಪಕರ ಮತ್ತು ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಿಗೆ ಬೋಧನಾನುಭವಕ್ಕೆ ಸಂಬಂಧಿಸಿದಂತೆ ನೀಡಬೇಕಾದ ಶಪಥ ಪತ್ರ (AFFIDAVIT)**

ಪ್ರಾಧ್ಯಾಪಕರ ಮತ್ತು ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಿಗೆ ಭೋಧನಾನುಭವವನ್ನು ಕಡ್ಡಾಯವಾಗಿ ನಿಗದಿಪಡಿಸಿದ್ದು, ಆಯುಷ್ ನಿರ್ದೇಶನಾಲಯವು ಅಭ್ಯರ್ಥಿಗಳಿಂದ 3 ನಮೂನೆಗಳಲ್ಲಿ ಶಪಥ ಪತ್ರಗಳನ್ನು **(AFFIDAVIT)** ಹಾಜರುಪಡಿಸುವಂತೆ ಸೂಚಿಸಿರುತ್ತದೆ. ಶಪಥ ಪತ್ರ–1 ಅಭ್ಯರ್ಥಿಗಳು, ಶಪಥ ಪತ್ರ–2 ಅನ್ನು ಸರ್ಕಾರಿ ಆಯುಷ್ ಕಾಲೇಜಿನ ಪ್ರಾಂಶುಪಾಲರು ಹಾಗೂ ಶಪಥ ಪತ್ರ–3 ಅನ್ನು ಖಾಸಗಿ ಆಯುಷ್ ಕಾಲೇಜಿನ ಆಡಳಿತ ಮಂಡಳಿಯವರಿಂದ / ಖಾಸಗಿ ಅನುದಾನಿತ ಆಯುಷ್ ಕಾಲೇಜಿನ ಆಡಳಿತ ಮಂಡಳಿಯವರು ಪ್ರಮಾಣೀಕರಿಸಬೇಕಾಗಿರುತ್ತದೆ. ಶಪಥ ಪತ್ರಗಳನ್ನು ಸರ್ಕಾರದ ಅಧೀನ ಕಾರ್ಯದರ್ಶಿ (ಆಯುಷ್), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇವರಿಂದ ಪಡೆದಿರಬೇಕು. ಸದರಿ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಅವರ ಸೇವಾನುಭವದ ಬಗ್ಗೆ ಅಧಿಸೂಚನೆಯಲ್ಲಿ ತೋರಿಸಿರುವ ನಮೂನೆಗಳಲ್ಲಿ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದ ಶಪಥ ಪತ್ರಗಳನ್ನು ಸಂದರ್ಶನಕ್ಕೆ ಹಾಜರಾದಾಗ ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು.

ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು. ಶಪಥ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಪಡೆಯಲಾದ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

6(ಸಿ) ಯಾವುದೇ ಹುದ್ದೆಗೆ ಆದ್ಯತಾ ವಿದ್ಯಾರ್ಹತೆಯನ್ನು ನಿಗದಿಪಡಿಸಿದಾಗ ಆದ್ಯತಾ ವಿದ್ಯಾರ್ಹತೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಅವರು ಎಷ್ಟೇ ಅಂಕಗಳನ್ನು ಗಳಿಸಿದ್ದರೂ ಚಾಲ್ತಿಯಲ್ಲಿರುವ ಮೀಸಲಾತಿಯನ್ನಾಧರಿಸಿ ಸಂದರ್ಶನಕ್ಕೆ ಪರಿಗಣಿಸಲಾಗುವುದು. ಆದರೆ ಆಯ್ಕೆಪಟ್ಟಿಯನ್ನು ಸಿದ್ಧಪಡಿಸುವಾಗ ಆದ್ಯತಾ ವಿದ್ಯಾರ್ಹತೆ ಹೊಂದಿರುವ ಮತ್ತು ಆದ್ಯತಾ ವಿದ್ಯಾರ್ಹತೆ ಹೊಂದದೇ ಇರುವ ಅಭ್ಯರ್ಥಿಗಳ ಒಟ್ಟು ಅಂಕಗಳ ಜೇಷ್ಠತೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ ಆಯ್ಕೆಗೆ ಪರಿಗಣಿಸಲಾಗುವುದು.

ತಾಂತ್ರಿಕ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಯು ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯಲ್ಲಿ ಗಳಿಸಿರುವ ಶೇಕಡವಾರು ಅಂಕಗಳ ಆಧಾರದ ಮೇಲೆ ಸಂದರ್ಶನಕ್ಕೆ ಆಹ್ವಾನಿಸುವುದರಿಂದ ಅಭ್ಯರ್ಥಿಗಳು ಅರ್ಜಿಯಲ್ಲಿ ಎಲ್ಲಾ ಸೆಮಿಸ್ಟರ್ / ವರ್ಷಗಳಲ್ಲಿ ಗಳಿಸಿರುವ ಒಟ್ಟಾರೆ ಅಂಕಗಳನ್ನು ಕ್ರೋಢೀಕರಿಸಿ ಗರಿಷ್ಠ ಮತ್ತು ಪಡೆದಿರುವ ಅಂಕಗಳನ್ನು ಸ್ಪಷ್ಟವಾಗಿ ನಮೂದಿಸುವುದು. ಕೆಲವು ವಿಶ್ವವಿದ್ಯಾನಿಲಯಗಳು ಮೊದಲನೇ ಬಾರಿ ಗಳಿಸಿರುವ ಅಂಕಗಳನ್ನು ಮಾತ್ರ ನಮೂದಿಸಿದ್ದು, ಒಂದಕ್ಕಿಂತ ಹೆಚ್ಚು ಬಾರಿ ಬರೆದು ಉತ್ತೀರ್ಣರಾಗಿರುವ ಅಂಕಗಳನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ. ಅಭ್ಯರ್ಥಿಗಳು ಆ ಅಂಕಗಳನ್ನು ಸೇರಿಸಿಕೊಂಡು ಜೊತೆಗೆ ಗ್ರೇಸ್ ಮಾರ್ಕ್ಸ್‌ನ್ನು ನೀಡಿದ್ದಲ್ಲಿ ಅದನ್ನು ಒಟ್ಟು ಅಂಕಗಳೊಂದಿಗೆ ಸೇರಿಸಿಕೊಂಡು ಅಂಕಗಳನ್ನು ನಮೂದಿಸುವುದು ಹಾಗೂ ಗ್ರೇಡ್ ಅಂಕಗಳನ್ನು ಪಡೆದ ಅಭ್ಯರ್ಥಿಗಳು ಅವರ ಗ್ರೇಡ್ ಅಂಕಗಳನ್ನು ಶೇಕಡವಾರು ಅಂಕಗಳಿಗೆ ಪರಿವರ್ತಿಸಿ ವಿಶ್ವವಿದ್ಯಾಲಯ ನೀಡಿರುವ ಪ್ರಮಾಣ ಪತ್ರದಲ್ಲಿ ನಮೂದಿಸಿರುವ ಶೇಕಡವಾರು ಅಂಕಗಳನ್ನು ತಪ್ಪದೇ ನಮೂದಿಸಬೇಕು. ಅಂಕಗಳು ವ್ಯತ್ಯಾಸ ಕಂಡು ಬಂದಲ್ಲಿ ಅಭ್ಯರ್ಥಿಯೇ ಜವಾಬ್ದಾರರಾಗಿರುತ್ತಾರೆ. ತಪ್ಪಿದ್ದಲ್ಲಿ ಆಯ್ಕೆಗೆ ಪರಿಗಣಿಸಲಾಗುವುದಿಲ್ಲ.

**6.1 ವಯೋಮಿತಿ:–** ಅನುಸೂಚಿಯಲ್ಲಿ ಆಯಾ ಹುದ್ದೆಗಳ ಮುಂದೆ ಸೂಚಿಸಿದಂತೆ, ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ ವಯೋಮಿತಿಯನ್ನು ಹೊಂದಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:–** (1) ಮಾಜಿ ಸೈನಿಕ ಎಂದರೆ ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧನಲ್ಲದ) ಸೇವೆ ಸಲ್ಲಿಸಿದ ವ್ಯಕ್ತಿ ಆದರೆ ಡಿಫೆನ್ಸ್ ಸೆಕ್ಯೂರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ. ಮತ್ತು (2) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

ಅಥವಾ

ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಿಂದ ಬಿಡುಗಡೆಯಾದವನು.

ಅಥವಾ

ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

ಅಥವಾ

ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:–

i) ನಿರಂತರ ಸೇವೆ ಸಲ್ಲಿಸಿದ ನಿವೃತ್ತಿ ಹೊಂದಿದ ಪಿಂಚಣಿದಾರರು.

ii) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

iii) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ:–** ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ನಿರ್ದಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ

ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ. ಇಂತಹವರು ಅರ್ಜಿ ಸಲ್ಲಿಸುವ ಮುನ್ನ ಸೇನೆಯಿಂದ ನಿರಾಕ್ಷೇಪಣಾ ಪತ್ರ ಪಡೆದು ಸಲ್ಲಿಸಬೇಕು.

(ಇ) ಅಭ್ಯರ್ಥಿಗಳು ನ್ಯಾಷನಲ್ ಕ್ಯಾಡೆಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಈ) ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು / ಅವಳು ಅಂತಹ ಗ್ರಾಮ ಪರಿಶೀಲಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಉ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

(ಊ) ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಋ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

(ೠ) ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು.

(2) ಉಪ ಕಂಡಿಕೆ 6.1.(ಋ) ರ ಮೇರೆಗೆ ವಯೋಮಿತಿ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಸಕ್ಷಮ ಪ್ರಾಧಿಕಾರದಿಂದ ತಾನು ವಿಧವೆಯೆಂದು ಹಾಗೂ ಮರು ಮದುವೆಯಾಗಿರುವುದಿಲ್ಲವೆಂಬ ಪ್ರಮಾಣ ಪತ್ರವನ್ನು ಪಡೆದು ಹಾಜರುಪಡಿಸಬೇಕು ಹಾಗೂ ಉಪ ಕಂಡಿಕೆ 6(ೠ) ಮೇರೆಗೆ ವಯೋಮಿತಿಯ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದು, ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದು ಹಾಜರುಪಡಿಸಬೇಕು.

**7. ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು :–**

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು:–

ಅ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು:– ನಮೂನೆ ' ಡಿ '

ಆ) ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು:– ನಮೂನೆ ' ಇ '

ಇ) ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು:– ನಮೂನೆ ' ಎಫ್ '

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಅಂದರೆ ತಹಶೀಲ್ದಾರ್ ರವರ ಸಹಿ ಮತ್ತು ಮೊಹರು ಅಥವಾ ಬಾರ್ ಕೋಡ್, ಹಾಲೋಗ್ರಾಮ್ ಮತ್ತು ವಾಟರ್ ಮಾರ್ಕ್‌ನೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1ರ ಮೀಸಲಾತಿ ಪ್ರಮಾಣ ಪತ್ರಗಳು ರದ್ದಾಗುವವರೆಗೂ ಚಾಲ್ತಿಯಲ್ಲಿರುವುದರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ನಿಗದಿಪಡಿಸಿದ ನಮೂನೆಯಲ್ಲಿ ಪಡೆದಿಟ್ಟುಕೊಂಡಿರತಕ್ಕದ್ದು. ಹಿಂದುಳಿದ ವರ್ಗಗಳ ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ವರ್ಗದ ಮೀಸಲಾತಿ ಪ್ರಮಾಣ ಪತ್ರಗಳು 5 ವರ್ಷ ಚಾಲ್ತಿಯಲ್ಲಿರುತ್ತವೆ. ಅಭ್ಯರ್ಥಿಗಳು ಪಡೆದಿರುವ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು. ಅರ್ಜಿಯ ನಿಗದಿತ ಸ್ಥಳದಲ್ಲಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ನಮೂದಿಸತಕ್ಕದ್ದು ಹಾಗೂ ಅದೇ ಪ್ರಮಾಣ ಪತ್ರವನ್ನು ಸಂದರ್ಶನ ಸಮಯದಲ್ಲಿ ಹಾಜರುಪಡಿಸತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಈ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಸಾಮಾನ್ಯ ಅರ್ಹತೆಯಡಿಯಲ್ಲಿ ಅರ್ಹರಾದಲ್ಲಿ ಮಾತ್ರ ಪರಿಗಣಿಸಲಾಗುವುದು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಪಡೆಯಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

**8. ಗ್ರಾಮೀಣ ಅಭ್ಯರ್ಥಿ:–**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಂವ್ಯಶಾಇ 59 ಶಾಸನ 2000 ದಿನಾಂಕ 06–01–2001 ರನ್ವಯ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 08 ಸೇನೆನಿ 2001 ದಿನಾಂಕ 13–02–2001 ರನ್ವಯ ನಮೂನೆ–2ನ್ನು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜುವಿನೊಂದಿಗೆ ಹಾಗೂ ಈ ಪ್ರಮಾಣ ಪತ್ರವಲ್ಲದೇ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜು

ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹವರು ಗ್ರಾಮೀಣ ಮೀಸಲಾತಿಗೆ ಸಹ ಅನರ್ಹರಾಗುತ್ತಾರೆ. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).

**9. ಕನ್ನಡ ಮಾಧ್ಯಮ ಅಭ್ಯರ್ಥಿ**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ 71 ಸೇಸೇನಿ 2001 ದಿನಾಂಕ 24–10–2002 ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರದ ನಮೂನೆಯನ್ನು ಈ ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).

**10. ಅಂಗವಿಕಲ ಅಭ್ಯರ್ಥಿ**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ 03–09–2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ – ' ಎ ' ಮತ್ತು ' ಬಿ ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 21 ಎಸ್‌ಆರ್‌ಆರ್ 2008 ದಿನಾಂಕ 03–08–2009ರ ಅನುಸೂಚಿಯಡಿ ಸೇರ್ಪಡೆ ಮಾಡಲಾಗಿರುವ ಇಲಾಖೆಗಳು) ಮತ್ತು ಸಮೂಹ 'ಸಿ' ಗುಂಪಿನ ಹುದ್ದೆಗಳಿಗೆ ಶೇಕಡ 5 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್‌ಆರ್‌ಆರ್ 99 ದಿನಾಂಕ 29–11–2002ರ ಅನುಸೂಚಿಯಡಿ ಸೇರ್ಪಡಿಸಲಾಗಿರುವ ಇಲಾಖೆಗಳು) ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40 ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೇಸೇನಿ 2005 ದಿನಾಂಕ 19–11–2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ: ಮಮಇ 65 ಪಿಹೆಚ್‌ಪಿ 2010 ದಿನಾಂಕ 18–02–2011ರಂತೆ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿಯ ವೈದ್ಯಕೀಯ ಪ್ರಾಧಿಕಾರ/ತಾಲ್ಲೂಕು ಮಟ್ಟದ ವೈದ್ಯಕೀಯ ಪ್ರಾಧಿಕಾರ/ಜಿಲ್ಲಾ ಮಟ್ಟದ ವೈದ್ಯಕೀಯ ಪ್ರಾಧಿಕಾರ/ ಬೆಂಗಳೂರು ವೈದ್ಯಕೀಯ ಪ್ರಾಧಿಕಾರ ಇವರಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು / ಗುರುತಿನ ಚೀಟಿಯ ಪ್ರತಿಗಳನ್ನು ಪರಿಗಣಿಸಲು ಬರುವುದಿಲ್ಲ. ಈ ಪ್ರಮಾಣ ಪತ್ರದ ನಮೂನೆಯನ್ನು ಸೂಚನೆಗಳಲ್ಲಿ ಅನುಬಂಧಿಸಲಾಗಿದೆ. ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು. (ಈ ಪ್ರಮಾಣ ಪತ್ರದ ನಮೂನೆಯನ್ನು ಈ ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).

**11. ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ (PDP)**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 23 ಸೇಸೇನಿ 99 ದಿನಾಂಕ 23–11–2000 ರನ್ವಯ ಯೋಜನೆಗಳಿಂದ ನಿರ್ವಸಿತರಾದ (ಆದರೆ ಈ ನಿಯಮಗಳು ಜಾರಿಯಾಗುವ 20 ವರ್ಷಕ್ಕೆ ಮುನ್ನ ನಿರ್ವಸಿತರಾದ ಕುಟುಂಬ ಅಭ್ಯರ್ಥಿಗಳಿಗೆ ಈ ಮೀಸಲಾತಿ ಅನ್ವಯವಾಗುವುದಿಲ್ಲ) ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು **(ಗ್ರೂಪ್ 'ಸಿ' ಹುದ್ದೆಗಳಿಗೆ ಮಾತ್ರ)** ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿತ ತಹಶೀಲ್ದಾರ್‌ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು ಹಾಗೂ ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರದ ನಮೂನೆಯನ್ನು ಈ ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).

11 (ಎ) ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯನ್ನು ಬೆಂಗಳೂರು / ಮೈಸೂರು / ಧಾರವಾಡ / ಗುಲ್ಬರ್ಗಾ / ಶಿವಮೊಗ್ಗ ಕೇಂದ್ರಗಳಲ್ಲಿ ತಾತ್ಕಾಲಿಕವಾಗಿ (Tentatively) ಆಗಸ್ಟ್ ಮಾಹೆಯಲ್ಲಿ ನಡೆಸಲಾಗುವುದು.

ಅಭ್ಯರ್ಥಿಗಳು ಅರ್ಜಿ ನಮೂನೆಯಲ್ಲಿ ಅವರು ಈ ಮೇಲಿನ ಪರೀಕ್ಷೆಯನ್ನು ತೆಗೆದುಕೊಳ್ಳಲು ಇಚ್ಛಿಸುವ ಕೇಂದ್ರವನ್ನು ನಮೂದಿಸತಕ್ಕದ್ದು. ಪರೀಕ್ಷಾ ಕೇಂದ್ರವನ್ನು ನಿಗದಿಪಡಿಸುವುದು ಆಯೋಗದ ಅಂತಿಮ ತೀರ್ಮಾನವಾಗಿರುತ್ತದೆ. ಈ ಪರೀಕ್ಷೆಗೆ **ದಿನಾಂಕವನ್ನು ನಿಗದಿಪಡಿಸಿದಾಗ ಪ್ರವೇಶ ಪತ್ರಗಳನ್ನು ಅಭ್ಯರ್ಥಿಗಳಿಗೆ ಅಂಚೆ ಮೂಲಕ ರವಾನಿಸಲಾಗುವುದು ಇಲ್ಲವೆ ವೆಬ್ ಸೈಟ್ ಮೂಲಕ ಡೌನ್‌ಲೋಡ್ ಮಾಡಿಕೊಳ್ಳಲು ತಿಳಿಸಲಾಗುವುದು ಹಾಗೂ ಈ ಬಗ್ಗೆ ಮಾಹಿತಿಯನ್ನು ಆಯೋಗದ ವೆಬ್ ಸೈಟ್‌ನಲ್ಲಿ ಬಿತ್ತರಿಸಲಾಗುವುದು.**

(ಬಿ) ಆಯಾ ಹುದ್ದೆಗಳಿಗೆ ಸಂದರ್ಶನ ದಿನಾಂಕ ನಿಗದಿಪಡಿಸಿ ಆಯೋಗದ ಜಾಲ ತಾಣ (Web Site)ದಲ್ಲಿ ಬಿತ್ತರಿಸಲಾಗುವುದು ಹಾಗೂ ಅರ್ಹ ಅಭ್ಯರ್ಥಿಗಳಿಗೆ ಸಂದರ್ಶನ ಪತ್ರಗಳನ್ನು Speed Post ಮುಖಾಂತರ ಕಳುಹಿಸಲಾಗುವುದು. ಅರ್ಹ ಅಭ್ಯರ್ಥಿಗಳಿಗೆ ಸಂದರ್ಶನ ಪತ್ರ ಸ್ವೀಕೃತವಾಗದಿದ್ದಲ್ಲಿ ಆಯೋಗವನ್ನು ಸಂಪರ್ಕಿಸಬಹುದು.

**12. ಆಯೋಗದೊಡನೆ ಪತ್ರ ವ್ಯವಹಾರ:**

ಆಯೋಗವು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಸಂದರ್ಶನಕ್ಕೆ ಅನುಮತಿಸಲಾದ ಅಭ್ಯರ್ಥಿಯಾಗಿದ್ದರೆ ಸಂದರ್ಶನ ಪತ್ರದ ನಕಲನ್ನು ನೀಡಲಾಗುವುದು.

ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು. ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಲೇಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯಲ್ಲಿ ಕೆಳಕಂಡ ಮಾಹಿತಿಗಳು ಒಳಗೊಂಡಿರಬೇಕು:–

(i) ಹುದ್ದೆಯ / ವಿಷಯದ ಹೆಸರು

(ii) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)

(iii) ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ

**13. ಪ್ರಾಮುಖ್ಯವಾದ ಸೂಚನೆಗಳು:–**

ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಒಂದು ಹಾಳೆಯ ಮೇಲಿಟ್ಟು ಅದರ ಕೆಳಗೆ ಕಪ್ಪು ಶಾಹಿಯ ಸ್ಕೆಚ್/ಮಾರ್ಕರ್ ಪೆನ್‌ಲ್ಲಿ ಸಹಿಯನ್ನು ಸ್ಕ್ಯಾನ್ ಮಾಡಿ ಅರ್ಜಿಗೆ UPLOAD ಮಾಡಬೇಕು. ಭಾವಚಿತ್ರ ಹಾಗೂ ಸಹಿಯನ್ನು UPLOAD ಮಾಡದ ಅರ್ಜಿಗಳು ತಿರಸ್ಕೃತಗೊಳ್ಳುತ್ತದೆ. ಈ ಕೆಳಕಂಡ ಪ್ರಮಾಣ ಪತ್ರಗಳನ್ನು ನಿಗದಿತ ನಮೂನೆಯಲ್ಲಿ ON LINE ಮೂಲಕ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಅದೇ ಮೀಸಲಾತಿ ಪ್ರಮಾಣ ಪತ್ರದ / ಇತರೇ ಪ್ರಮಾಣ ಪತ್ರಗಳ ಮೂಲ ಪ್ರತಿಯನ್ನು ಸಂದರ್ಶನಕ್ಕೆ / ಮೂಲ ದಾಖಲಾತಿಯ ಪರಿಶೀಲನೆಗೆ ಅರ್ಹರಾದಾಗ ಆ ಸಮಯದಲ್ಲಿ ಪರಿಶೀಲನೆಗೆ ಹಾಜರುಪಡಿಸಬೇಕು. ಇತರೆ ನಮೂನೆಗಳಲ್ಲಿ ಅಥವಾ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ತಪ್ಪಿದ್ದಲ್ಲಿ ಇವರ ಮೀಸಲಾತಿಯನ್ನು ತಿರಸ್ಕರಿಸಲಾಗುವುದು / ಅಭ್ಯರ್ಥಿತ್ವವನ್ನು ಅನರ್ಹಗೊಳಿಸಲಾಗುವುದು.

1) ಹುದ್ದೆಗೆ ನಿಗದಿಪಡಿಸಿದ ಶುಲ್ಕವನ್ನು ಬ್ಯಾಂಕಿನಲ್ಲಿ ಪಾವತಿಸಿದ ಚಲನ್ ಪ್ರತಿ.

2) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ /ಸೆಮಿಸ್ಟರ್‌ಗಳ ಅಂಕಪಟ್ಟಿಗಳು ಹಾಗೂ ಘಟಿಕೋತ್ಸವದ ಪ್ರಮಾಣ ಪತ್ರಗಳು / ಗ್ರೇಡ್‌ನ್ನು ಶೇಕಡವಾರು ಅಂಕಗಳಿಗೆ ಪರಿವರ್ತಿಸಿದ ಪ್ರಮಾಣ ಪತ್ರ

3) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ /ಶಾಲೆಯ ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.

4) ನಿರಾಕ್ಷೇಪಣಾ ಪತ್ರ. (ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ)

5) ಸೈನಿಕ ಸೇವೆಯಿಂದ ಬಿಡುಗಡೆಯಾದ ಪ್ರಮಾಣ ಪತ್ರ ಮತ್ತು ಪಿಂಚಣಿ / ಗ್ರಾಚ್ಯುಟಿ ಪಡೆಯುತ್ತಿರುವ ಪ್ರಮಾಣ ಪತ್ರ / ಮಾಜಿ ಸೈನಿಕ ಅವಲಂಬಿತರಾಗಿದ್ದಲ್ಲಿ, ಮಾಜಿ ಸೈನಿಕರು ಸೇವೆಯಲ್ಲಿರುವಾಗ ಮೃತಪಟ್ಟಿದ್ದಲ್ಲಿ ಅಥವಾ ಖಾಯಂ ಆಗಿ ಗಾಯಗೊಂಡಿರುವ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)

6) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿಗಳ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)

7) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)

8) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

9) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

10) ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿಯ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

11) ಸೇವಾನುಭವ ಪ್ರಮಾಣ ಪತ್ರಗಳು (ನಿಗದಿಪಡಿಸಿದಲ್ಲಿ)

12) ಆಯುಷ್ ಕೌನ್ಸಿಲ್ / ನರ್ಸಿಂಗ್ ಕೌನ್ಸಿಲ್ ರಿಜಿಸ್ಟ್ರೇಷನ್ ಪ್ರಮಾಣ ಪತ್ರಗಳು

13) ಆಯುಷ್ ನಿರ್ದೇಶನಾಲಯದ ಪ್ರಾಧ್ಯಾಪಕರ/ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಿಗೆ ಶಪಥ ಪತ್ರ (AFFIDAVIT) 3 ನಮೂನೆಗಳಲ್ಲಿ

**14. ವಿಶೇಷ ಸೂಚನೆಗಳು:–**

(1) ON LINE ಮೂಲಕ ಅರ್ಜಿ ಸಲ್ಲಿಸುವಾಗ ಎಲ್ಲಾ ಮಾಹಿತಿಗಳನ್ನು ಸರಿಯಾಗಿ ಭರ್ತಿ ಮಾಡಿರುವ ಬಗ್ಗೆ ಖಚಿತಪಡಿಸಿಕೊಂಡು ನಂತರ ಅದರ ಒಂದು ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಂಡು ನೇಮಕಾತಿ ಪ್ರಕ್ರಿಯೆ ಮುಗಿಯುವವರೆಗೂ ಭದ್ರವಾಗಿ ತೆಗೆದಿಟ್ಟುಕೊಂಡಿರತಕ್ಕದ್ದು.

(2) ಈಗಾಗಲೇ ಸೇವೆಯಲ್ಲಿರುವ / ಸೇವೆ ಸಲ್ಲಿಸಿದ ಅಭ್ಯರ್ಥಿಗಳು ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಅನುಮತಿಯನ್ನು ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ವಿವರಗಳನ್ನು ಅರ್ಜಿಯಲ್ಲಿ ನಮೂದಿಸತಕ್ಕದ್ದು ಮತ್ತು ಇದೇ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಸಂದರ್ಶನದ / ಮೂಲ ದಾಖಲಾತಿಯ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು ತಪ್ಪಿದ್ದಲ್ಲಿ ಅನರ್ಹಗೊಳಿಸಲಾಗುವುದು.

(3) ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕವಾಗುವುದು.

